# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 1405(1659)
**ಸದಸ್ಯರ ಹೆಸರು** : ಶ್ರೀ ಅರವಿಂದ ಕುಮಾರ ಅರಳಿ
(ವಿಧಾನ ಸಭೆಯಿಂದ ಚುನಾಯಿತರಾದವರು)
**ಉತ್ತರಿಸುವ ದಿನಾಂಕ** : 14.03.2022
**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಲ್ಯಾಣ ಕರ್ನಾಟಕದ ವಿಭಾಗದಲ್ಲಿ ಸರ್ಕಾರಿ, ಖಾಸಗಿ ಅನುದಾನಿತ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳು ಹಾಗೂ ಪದವಿ ಪೂರ್ವ ಕಾಲೇಜುಗಳ ಶಿಕ್ಷಕರ ಸಂಖ್ಯೆ ಎಷ್ಟು; ಈ ಸಂಸ್ಥೆಗಳಿಗೆ ಮಂಜೂರಾಗಿರುವ ಶಿಕ್ಷಕರ ಸಂಖ್ಯೆ ಎಷ್ಟು; ಮಂಜೂರಾತಿ ನೀಡಲಾಗಿತ್ತು; ಎಷ್ಟು ಹುದ್ದೆಗಳನ್ನು ಭರ್ತಿ ಮಾಡಲಾಗಿದೆ; ಮತ್ತು ಎಷ್ಟು ಹುದ್ದೆಗಳು ಖಾಲಿ ಇವೆ; (ತಾಲ್ಲೂಕುವಾರು ವಿವರವಾದ ಮಾಹಿತಿ ನೀಡುವುದು) | ಕಲ್ಯಾಣ ಕರ್ನಾಟಕ ವಿಭಾಗದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಮಂಜೂರಾದ, ಕಾರ್ಯನಿರತ ಹಾಗೂ ಖಾಲಿ ಹುದ್ದೆಗಳ ಶಿಕ್ಷಕರ ಮಾಹಿತಿ ಈ ಕೆಳಗಿನಂತಿದೆ. (ಕೋಷ್ಟಕಗಳು ಕೆಳಗೆ) |

ಕಲ್ಯಾಣ ಕರ್ನಾಟಕ ವಿಭಾಗದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಮಂಜೂರಾದ, ಕಾರ್ಯನಿರತ ಹಾಗೂ ಖಾಲಿ ಹುದ್ದೆಗಳ ಶಿಕ್ಷಕರ ಮಾಹಿತಿ ಈ ಕೆಳಗಿನಂತಿದೆ.

| ಸರ್ಕಾರಿ ಪ್ರಾಥಮಿಕ | | | ಸರ್ಕಾರಿ ಪ್ರೌಢ | | |
|---|---|---|---|---|---|
| ಮಂಜೂರಾದ ಹುದ್ದೆಗಳು | ಭರ್ತಿಯಾದ ಹುದ್ದೆಗಳು | ಖಾಲಿ ಹುದ್ದೆಗಳು | ಮಂಜೂರಾದ ಹುದ್ದೆಗಳು | ಭರ್ತಿಯಾದ ಹುದ್ದೆಗಳು | ಖಾಲಿ ಹುದ್ದೆಗಳು |
| 45985 | 31943 | 14042 | 11531 | 9551 | 1980 |

ಅನುದಾನಿತ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಮಂಜೂರಾದ ಕಾರ್ಯನಿರತ ಹಾಗೂ ಖಾಲಿ ಹುದ್ದೆಗಳ ಶಿಕ್ಷಕರ ಮಾಹಿತಿ ಈ ಕೆಳಗಿನಂತಿದೆ.

| ಅನುದಾನಿತ ಪ್ರಾಥಮಿಕ | | | ಅನುದಾನಿತ ಪ್ರೌಢ | | |
|---|---|---|---|---|---|
| ಮಂಜೂರಾದ ಹುದ್ದೆಗಳು | ಭರ್ತಿಯಾದ ಹುದ್ದೆಗಳು | ಖಾಲಿ ಹುದ್ದೆಗಳು | ಮಂಜೂರಾದ ಹುದ್ದೆಗಳು | ಭರ್ತಿಯಾದ ಹುದ್ದೆಗಳು | ಖಾಲಿ ಹುದ್ದೆಗಳು |
| 5160 | 3233 | 1927 | 3670 | 2567 | 1103 |

ಕಲ್ಯಾಣ-ಕರ್ನಾಟಕದ ವಿಭಾಗದಲ್ಲಿ ಸರ್ಕಾರಿ, ಖಾಸಗಿ ಅನುದಾನಿತ ಪದವಿಪೂರ್ವ ಕಾಲೇಜುಗಳಲ್ಲಿನ ಸಿಬ್ಬಂದಿ ವಿವರ ಈ ಕೆಳಕಂಡಂತಿದೆ.

| Districts | sanctioned | | working | | vacant | |
|---|---|---|---|---|---|---|
| | Govt | Aided | Govt | Aided | Govt | Aided |
| Bidar | 217 | 360 | 176 | 209 | 41 | 151 |
| Kalburgi | 471 | 228 | 360 | 122 | 111 | 106 |
| Bellary | 467 | 219 | 359 | 151 | 108 | 68 |
| Koppal | 348 | 69 | 253 | 42 | 95 | 27 |
| Raichur | 369 | 71 | 279 | 21 | 90 | 50 |
| Yadgiri | 228 | 40 | 140 | 38 | 88 | 2 |
| Total | 2100 | 987 | 1567 | 583 | 533 | 404 |

ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

| | | |
|---|---|---|
| ಆ | ಶಿಕ್ಷಕರ ಹುದ್ದೆಗಳು ಖಾಲಿ ಇದ್ದರೆ ಮಕ್ಕಳ ವಿದ್ಯಾಭ್ಯಾಸಕ್ಕೆ ತೊಂದರೆಯಾಗುವುದಿಲ್ಲವೇ; ಹಾಗಿದ್ದರೆ, ಈ ಖಾಲಿ ಹುದೆಗಳನ್ನು ಭರ್ತಿ ಮಾಡುವುದು ಯಾವಾಗ; ದಿನಾಂಕ: 31/12/2015ರವರೆಗೆ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಸರ್ಕಾರ ಅನುಮತಿ ನೀಡಿರುವುದು ನಿಜವೇ; | ರಾಜ್ಯದ ಸರ್ಕಾರಿ ಪ್ರಾಥಮಿಕ, ಪ್ರೌಢ ಮತ್ತು ಪದವಿಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆದುರಾಗಿ. ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಅತಿಥಿ ಶಿಕ್ಷಕರು/ಉಪನ್ಯಾಸಕರನ್ನು ತಾತ್ಕಾಲಿಕವಾಗಿ ನೇಮಕ ಮಾಡಲಾಗಿದೆ.<br><br>ರಾಜ್ಯದ ಖಾಸಗಿ ಅನುದಾನಿತ ಪ್ರೌಢಶಾಲೆ ಹಾಗೂ ಪದವಿಪೂರ್ವ ಕಾಲೇಜುಗಳಲ್ಲಿ ದಿನಾಂಕ:31/12/2015ರೊಳಗೆ ಮರಣ ನಿವೃತ್ತಿ ಮತ್ತು ಇತರೆ ಕಾರಣಗಳಿಂದ ತೆರವಾದ ಕ್ರಮವಾಗಿ 257 ಮತ್ತು 173 ಹುದ್ದೆಗಳನ್ನು ಭರ್ತಿ ಮಾಡಲು ಅನುಮೋದನೆ ನೀಡಲಾಗಿದೆ.<br><br>ಅನುದಾನಿತ ಪ್ರೌಢಶಾಲೆಗಳಲ್ಲಿ ದಿನಾಂಕ:31-12-2015ರ ಪೂರ್ವದಲ್ಲಿ ನಿವೃತ್ತಿ , ನಿಧನ, ರಾಜೀನಾಮೆ ಮತ್ತು ಇತರೆ ಕಾರಣಗಳಿಂದ ಖಾಲಿಯಿರುವ ಬಾಕಿ 2181 ಹುದ್ದೆಗಳನ್ನು ಭರ್ತಿ ಮಾಡಲು ಸಹಮತಿ ನೀಡುವಂತೆ ಆರ್ಥಿಕ ಇಲಾಖೆಯನ್ನು ಕೋರಲಾಗಿದೆ. ಆರ್ಥಿಕ ಇಲಾಖೆ ಸಹಮತಿ ನೀಡಿದ ನಂತರ ಭರ್ತಿ ಮಾಡಲು ಅನುಮತಿ ನೀಡಲಾಗುವುದು. |
| ಇ | ದಿನಾಂಕ:31/12/2015ರ ವರೆಗಿನ ಖಾಲಿ ಇರುವ ಹುದ್ದೆಗಳನ್ನು ಇಲ್ಲಿಯವರೆಗೆ ಭರ್ತಿ ಮಾಡದಿರಲು ಕಾರಣವೇನು; ಇದಕ್ಕೆ ನಿರ್ದಿಷ್ಟವಾದ ವಿವರ ನೀಡುವುದು) | ಸರ್ಕಾರದ ಸುತ್ತೋಲೆ ಸಂಖ್ಯೆ: ಆಇ 157 ವೆಚ್ಚ-8 ದಿನಾಂಕ:10-06-2020 ರಲ್ಲಿ ಖಾಲಿ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳುವ ಪ್ರಸ್ತಾವನೆಗಳನ್ನು 2020-21ನೇ ಸಾಲಿನಲ್ಲಿ ಭರ್ತಿ ಮಾಡದಿರಲು ನಿರ್ದೇಶನ ನೀಡಲಾಗಿದೆ. ಆದಾಗ್ಯೂ, ಖಾಸಗಿ ಅನುದಾನಿತ ಪ್ರೌಢಶಾಲೆ ಹಾಗೂ ಪದವಿಪೂರ್ವ ಕಾಲೇಜುಗಳಲ್ಲಿ ದಿನಾಂಕ:31/12/2015ರೊಳಗೆ ಮರಣ ನಿವೃತ್ತಿ ಮತ್ತು ಇತರೆ ಕಾರಣಗಳಿಂದ ತೆರವಾದ ಕ್ರಮವಾಗಿ 257 ಮತ್ತು 173 ಹುದ್ದೆಗಳನ್ನು ಭರ್ತಿ ಮಾಡಲು ಅನುಮೋದನೆ ನೀಡಲಾಗಿದೆ. |
| ಈ | ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಸರ್ಕಾರದಿಂದ ಅನುಮತಿ ನೀಡದಿರಲು ಕಾರಣವೇನು? | ಅನುದಾನಿತ ಪ್ರೌಢಶಾಲೆಗಳಲ್ಲಿ ಖಾಲಿ ಹುದ್ದೆಗಳನ್ನು ತುಂಬಲು ಅಭ್ಯರ್ಥಿಗಳ ಆಯ್ಕೆಗಾಗಿ ಪತ್ರಿಕಾ ಪ್ರಕಟಣೆ ಹೊರಡಿಸಬೇಕಾಗಿದ್ದು, ಈ ಬಗ್ಗೆ ಇರುವ ಗೊಂದಲಗಳನ್ನು ಬಗೆಹರಿಸಿ ನಿರ್ದೇಶನ ನೀಡಲಾಗಿದೆ. ಸದರಿ ಹುದ್ದೆಗಳನ್ನು ಭರ್ತಿ ಮಾಡುವ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. |

ಇಪಿ 96 ಎಸ್‌ಇಎಸ್ 2022

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು